ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಶುಕ್ರವಾರ, ದಿನಾಂಕ: 25ನೇ ಸೆಪ್ಟಂಬರ್, 2020

ಆಯವ್ಯಯದಲ್ಲಿ ಘೋಷಿಸಿರುವಂತೆ ಕಲಾವಿದರಿಗೆ ಮಾಸಾಶನವನ್ನು ಮಂಜೂರು ಮಾಡುವ ಬಗ್ಗೆ

ಶ್ರೀ ಬಿ.ಕೆ. ಹರಿಪ್ರಸಾದ್ (ವಿಧಾನ ಸಭೆಯಿಂದ ಚುನಾಯಿತರಾದವರು):-

630 (692) ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) 2018-19ನೇ ಆಯವ್ಯಯದಲ್ಲಿ ಘೋಷಿಸಿರುವಂತೆ ಇಳಿವಯಸ್ಸಿನ ಅಶಕ್ತ ಕಲಾವಿದರ ಗೌರವಯುತ ಜೀವನ ನಿರ್ವಹಣೆಗಾಗಿ ನೀಡುತ್ತಿರುವ ಮಾಸಾಶನ ಮೊತ್ತವನ್ನು ರೂ.1000 ರಿಂದ 1500 ರೂಗಳಿಗೆ ಹೆಚ್ಚಿಸಿ ಒಟ್ಟು 8330 ಕಲಾವಿದರಿಗೆ ಮಾಸಾಶನ ಮಂಜೂರು ಮಾಡಲಾಗಿರುವುದನ್ನು ಅನುಷ್ಠಾನಕ್ಕೆ ತರಲಾಗುವುದೇ ;

(ಆ) ಈ ಯೋಜನೆಯನ್ನು ವಿಸ್ತರಿಸಿ ಇನ್ನು ಹೆಚ್ಚಿನ ಕಲಾವಿದರನ್ನು ಗುರುತಿಸಿ ಅವರುಗಳಿಗೂ ಸಹ ಮಾಸಾಶನ ಮಂಜೂರು ಮಾಡಲಾಗುತ್ತಿದೆಯೇ ; ಮಂಜೂರು ಮಾಡಿದ್ದಲ್ಲಿ, ಇದೂವರೆಗೂ ಮಾಸಾಶನ ಪಡೆದ ಫಲಾನುಭವಿಗಳ ಸಂಖ್ಯೆ ಎಷ್ಟು ? (ಸಂಪೂರ್ಣ ವರದಿ ನೀಡುವುದು)